# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಜೂನ್ ೫, ೨೦೧೪ (ಜ್ಯೇಷ್ಠ ೧೫, ಶಕ ವರ್ಷ ೧೯೩೬)<br>Bangalore, Thursday, June 5, 2014 (Jyeishta 15, Shaka Varsha 1936) | ಸಂಚಿಕೆ ೨೩<br>Issue 23 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಸಿವಿಲ್ ಸೇವಾ (ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ) ನಿಯಮಗಳು, 2012ರಡಿ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ನಡೆಸುವ ಬಗ್ಗೆ.

**ಓದಲಾಗಿದೆ :**

1. ದಿನಾಂಕ: 07.03.2012ರ ಅಧಿಸೂಚನೆ ಸಂ: ಸಿಆಸುಇ 43 ಸೇವನೆ 2008.
2. ದಿನಾಂಕ: 06.08.2012ರ ಅಧಿಸೂಚನೆ ಸಂ: ಸಿಆಸುಇ 59 ಸೇವನೆ 2012.
3. ದಿನಾಂಕ: 18.12.2012ರ ಅಧಿಸೂಚನೆ ಸಂ: ಸಿಆಸುಇ 43 ಸೇವನೆ 2008.
4. ವ್ಯವಸ್ಥಾಪಕ ನಿರ್ದೇಶಕರು, ಕಿಯೋನಿಕ್ಸ್, ಇವರ ದಿನಾಂಕ: 16.11.2012ರ ಪತ್ರ ಸಂ: ಕಿಯಾನಿಕ್ಸ್: ಐ.ಟಿ.ಇ.ಎಸ್.ಕ.ಸಾ.ಪ:2012–13.
5. ದಿನಾಂಕ: 01.02.2014ರ ಸರ್ಕಾರದ ಪತ್ರ ಸಂ: ಸಿಆಸುಇ 43 ಸೇವನೆ 2008.
6. ದಿನಾಂಕ: 29.01.2014ರ ಅಧಿಸೂಚನೆ ಸಂ; ಆಇ 31 ವೆಚ್ಚ–12/14

**ಪ್ರಸ್ತಾವನೆ:**

1. ಮೇಲೆ (1)ರಲ್ಲಿ ಓದಲಾದ ದಿನಾಂಕ: 07.03.2012ರ ಅಧಿಸೂಚನೆಯನ್ವಯ ಕರ್ನಾಟಕ ಸಿವಿಲ್ ಸೇವಾ (ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ) ನಿಯಮಗಳು, 2012ನ್ನು ರಚಿಸಲಾಗಿದೆ. ನಂತರ, ಮೇಲೆ (2)ರಲ್ಲಿ ಓದಲಾದ ದಿನಾಂಕ: 06.08.2012ರ ಅಧಿಸೂಚನೆಯನ್ವಯ ನೇರ ನೇಮಕಾತಿಯ ಅಭ್ಯರ್ಥಿಗಳಿಗೆ ಸಂಬಂಧಿಸಿದಂತೆ ಸದರಿ ನಿಯಮಗಳಿಗೆ ತಿದ್ದುಪಡಿ ಮಾಡಲಾಗಿದೆ. ತದನಂತರ, ಮೇಲೆ (3)ರಲ್ಲಿ ಓದಲಾದ ದಿನಾಂಕ: 18.12.2012ರ ಅಧಿಸೂಚನೆಯನ್ವಯ ಸದರಿ ಸಾಕ್ಷರತಾ ಪರೀಕ್ಷೆಗೆ ಸಂಬಂಧಿಸಿದಂತೆ ಪಠ್ಯಕ್ರಮ (Syllabus), ಪರೀಕ್ಷೆಯ ಸ್ವರೂಪ (Pattern of testing) ಇತ್ಯಾದಿಗಳನ್ನು ನಿಗದಿಪಡಿಸಲಾಗಿದೆ. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 4(ಜಿ) ಅಡಿ ವಿನಾಯಿತಿ ಹೊಂದಿರುವ ಕಿಯಾನಿಕ್ಸ್ ಸಂಸ್ಥೆಯಿಂದಲೇ ಕಂಪ್ಯೂಟರ್ ಸಾಕ್ಷರತಾ ತರಬೇತಿ ನೀಡಿ ಪರೀಕ್ಷೆ ನಡೆಸಲು ಆದೇಶಿಸುವಂತೆ, ಮೇಲೆ (4)ರಲ್ಲಿ ಓದಲಾದ ಅವರ ದಿನಾಂಕ: 16.11.2012ರ ಪತ್ರದನ್ವಯ, ವ್ಯವಸ್ಥಾಪಕ ನಿರ್ದೇಶಕರು, ಕಿಯೋನಿಕ್ಸ್, ಇವರು ಕೋರಿರುತ್ತಾರೆ. ಸದರಿ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ ನಡೆಸುವ ಬಗ್ಗೆ ತೆಗೆದುಕೊಳ್ಳಬೇಕಾದ ಕ್ರಮಗಳ ಬಗ್ಗೆ ಚರ್ಚಿಸಲು ದಿನಾಂಕ: 24.01.2014ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳ ಪ್ರತಿಯನ್ನು, ಮೇಲೆ (5)ರಲ್ಲಿ ಓದಲಾದ ದಿನಾಂಕ: 01.02.2014ರ ಸರ್ಕಾರದ ಪತ್ರದನ್ವಯ, ಸೂಕ್ತ ಕ್ರಮಕ್ಕಾಗಿ ಕಳುಹಿಸಲಾಗಿದೆ. ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ನಡೆಸುವ ಕಾರ್ಯಕ್ಕೆ ಸಂಬಂಧಿಸಿದಂತೆ ಕ್ರಮ ತೆಗೆದುಕೊಳ್ಳುವ ಕುರಿತಂತೆ ಸದರಿ ಸಭೆಯಲ್ಲಿ ತೆಗೆದುಕೊಂಡ ನಿರ್ಣಯಗಳ ಮುಖ್ಯಾಂಶಗಳನ್ನು ಈ ಕೆಳಗೆ ನಮೂದಿಸಿದೆ:–

(1) ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ)ಯ ಸಂಪೂರ್ಣ ನೇತೃತ್ವ ಹಾಗೂ ಹೊಣೆಗಾರಿಕೆಯಲ್ಲಿ ನಡೆಸತಕ್ಕದ್ದು.

(2) ಈ ಪರೀಕ್ಷೆಯನ್ನು ಕಿಯಾನಿಕ್ಸ್ ಸಂಸ್ಥೆಯು ನಡೆಸಲು ಸಿದ್ಧವಿರುವುದರ ಬಗ್ಗೆ ತಿಳಿಸುತ್ತಿರುವುದರಿಂದ ಈ ಬಗ್ಗೆಯೂ ಪರಿಶೀಲಿಸಿ ಸಿಆಸು (ಇ–ಆಡಳಿತ) ಇಲಾಖೆಯು ಈ ಬಗ್ಗೆ ಟೆಂಡರ್ ಕರೆಯುವ ಮೂಲಕವಾಗಲೀ ಅಥವಾ ಕೆಟಿಟಿಪಿ ಕಾಯ್ದೆಯಡಿ ವಿನಾಯಿತಿ ಪಡೆಯುವ ಬಗ್ಗೆಯಾಗಲೀ ಪರಿಶೀಲಿಸಿ ನಿಯಮಾನುಸಾರ ಪರೀಕ್ಷೆಯ ಕಾರ್ಯಗಳನ್ನು ಕಿಯಾನಿಕ್ಸ್ ಸಂಸ್ಥೆಯ ಮೂಲಕ ಅವಶ್ಯವಿದ್ದಲ್ಲಿ ಜಿಲ್ಲಾಧಿಕಾರಿಗಳ

ಸಹಕಾರದಿಂದ/ ಜಿಲ್ಲಾ ತರಬೇತಿ ಸಂಸ್ಥೆಗಳ ನೆರವಿನಿಂದ ನಡೆಸುವ ಬಗ್ಗೆಯೂ ಪರಿಶೀಲಿಸಿ ಆರ್ಥಿಕ ಇಲಾಖೆಯೊಡನೆ ಸಮಾಲೋಚಿಸಿ ಅವಶ್ಯಕ ಕ್ರಮಗಳನ್ನು ಅತಿ ಶೀಘ್ರವಾಗಿ ತೆಗೆದುಕೊಳ್ಳಬೇಕು.

(3) ಈಗಾಗಲೇ ಹೆಚ್.ಆರ್.ಎಂ.ಎಸ್ ಯೋಜನೆಯಡಿ ಸರ್ಕಾರಿ ನೌಕರರ ವಿವರಗಳು ವಿಶಿಷ್ಟವಾದ ಗುರುತಿನ ಸಂಖ್ಯೆಯೊಂದಿಗೆ ದಾಖಲಾಗಿರುವುದರಿಂದ ಈ ವ್ಯವಸ್ಥೆಯೊಡನೆ ಅವಶ್ಯಕತೆಯಿದ್ದಲ್ಲಿ ಲಿಂಕೇಜ್ ಮಾಡಿ ಆನ್‌ಲೈನ್ ಪರೀಕ್ಷೆಗಳನ್ನು ಮೇಲೆ ತಿಳಿಸಿದಂತೆ 3 ತಿಂಗಳಿಗೊಮ್ಮೆ ನಡೆಸುವುದು; ಪರೀಕ್ಷಾ ವಿಧಾನವನ್ನು ಆದಷ್ಟು ಸರಳೀಕರಿಸಿ ಪರೀಕ್ಷಾ ಪ್ರಮಾಣ ಪತ್ರ ಪಡೆಯುವವರೆಗಿನ ಪೂರ್ಣ ವ್ಯವಸ್ಥೆಯು ಆನ್ ಲೈನ್ ಮೂಲಕ ನಡೆಯುವಂತೆಯೂ ಇ–ಆಡಳಿತ ಇಲಾಖೆಯು ಅವಕಾಶ ಕಲ್ಪಿಸುವುದು;

(4) ಇ–ಆಡಳಿತ ಇಲಾಖೆಯು ಈ ಬಗ್ಗೆ ಕೇಂದ್ರೀಕೃತ ಪ್ರೊಸೆಸಿಂಗ್ (centralized processing) ವ್ಯವಸ್ಥೆ ಇಡತಕ್ಕದ್ದು ಹಾಗೂ ಈ ಬಗ್ಗೆ ಫ್ಲೋ ಚಾರ್ಟ್ ತಯಾರಿಸಿ, ಕ್ವೆಷ್ಚನ್ ಬ್ಯಾಂಕ್‌ನ್ನು ತಯಾರಿಸಬೇಕು; ಈಗಾಗಲೇ ಕಿಯಾನಿಕ್ಸ್ ಸಂಸ್ಥೆಯು ತಯಾರಿಸಿರುವ ಕ್ವೆಶ್ಚನ್ ಬ್ಯಾಂಕು ಹಾಗೂ ಇತರೆ ಪಠ್ಯಕ್ರಮಗಳು ಸರ್ಕಾರವು ನಿಗದಿಪಡಿಸಿರುವ ಪಠ್ಯಕ್ರಮದಂತೆಯೇ ಇರುವ ಬಗ್ಗೆ ಖಚಿತಪಡಿಸಿಕೊಂಡು ಅನುಮತಿ ನೀಡಬಹುದು.

2. ವಿವಿಧ ಇಲಾಖೆ ಇತ್ಯಾದಿಗಳು ಪ್ರಾಯೋಜಿಸುವ ಗಣಕ ತರಬೇತಿ ಹಾಗೂ ಐಟಿ–ಹಾರ್ಡ್‌ವೇರ್, ಐಟಿ–ಸಾಫ್ಟ್‌ವೇರ್ ಮತ್ತು ವಿದ್ಯುನ್ಮಾನ ಉಪಕರಣಗಳ ಖರೀದಿ ಸೇವೆ, ಎ.ಎಂ.ಸಿ (ವಾರ್ಷಿಕ ನಿರ್ವಹಣೆ), ಡಾಟಾ ಎಂಟ್ರಿ, ಐಟಿ ಸಲ್ಯೂಷನ್ (ಹಾರ್ಡ್‌ವೇರ್ ಮತ್ತು ಸಾಫ್ಟ್‌ವೇರ್) ಅಭಿವೃದ್ಧಿ ಮತ್ತು ನಿರ್ವಹಣೆ, ಐಟಿ–ನೆಟ್‌ವರ್ಕಿಂಗ್, ಐಟಿ–ಕನ್ಸ್‌ಲ್‌ಟೆನ್ಸಿ, ಐಟಿ–ಎನೇಬೆಲ್ಡ್ (ITES) ಸೇವೆ ಹಾಗೂ ಇ–ಗವರ್‌ನೆನ್ಸ್ (e-Governance) (ವಿದ್ಯುನ್ಮಾನ ಆಡಳಿತ) ಪ್ರಾಜೆಕ್ಟ್‌ಗಳ ಸೇವೆಗಳನ್ನು ಕಿಯಾನಿಕ್ಸ್ ಸಂಸ್ಥೆಯಿಂದ ಪಡೆಯಲು ಮೇಲೆ (6)ರಲ್ಲಿ ಓದಲಾದ ದಿನಾಂಕ: 29.01.2014ರ ಅಧಿಸೂಚನೆಯನ್ವಯ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 4(ಜಿ) ಅಡಿ ವಿನಾಯಿತಿ ನೀಡಲಾಗಿದೆ. ಮೇಲೆ ವಿವರಿಸಿದ ಹಿನ್ನೆಲೆಯಲ್ಲಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 34 ಇಆಇ 2012, ಬೆಂಗಳೂರು ದಿನಾಂಕ: 28ನೇ ಮಾರ್ಚ್ 2014**

3. ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನಲೆಯಲ್ಲಿ, ಕರ್ನಾಟಕ ಸಿವಿಲ್ ಸೇವಾ (ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ) ನಿಯಮಗಳು, 2012ರಡಿ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ನಡೆಸುವ ಕಾರ್ಯವನ್ನು, ಮೇಲೆ (6)ರಲ್ಲಿ ಓದಲಾದ ದಿನಾಂಕ: 29.01.2014ರ ಅಧಿಸೂಚನೆಯನ್ವಯ ನೀಡಿದ ವಿನಾಯಿತಿಯಂತೆ ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತ (ಕಿಯಾನಿಕ್ಸ್)ಗೆ ವಹಿಸಲು ಈ ಮೂಲಕ ಸರ್ಕಾರದ ಮಂಜೂರಾತಿ ನೀಡಿದೆ. ದಿನಾಂಕ: 29.01.2014ರ ಸದರಿ ಅಧಿಸೂಚನೆಯನ್ವಯ ವಿಧಿಸಿದ ಷರತ್ತಿನ ಪ್ರಕಾರ, ಕಿಯಾನಿಕ್ಸ್ ಸಂಸ್ಥೆಯು ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ನಡೆಸುವ ಸಂಬಂಧ ಸರಬರಾಜು, ಸೇವೆಯನ್ನು ತನ್ನ ಆಂತರಿಕ ಸಂಪನ್ಮೂಲಗಳಿಂದ ಒದಗಿಸದೇ ಬಾಹ್ಯ ಮೂಲಗಳಿಂದ ಪಡೆಯುವುದಾದಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999, ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳು, 2000 ಮತ್ತು ಇ–ಸಂಗ್ರಹಣಾ ಆದೇಶಗಳ ನಿಬಂಧನೆಗಳನ್ನು ಆ ಸಂಸ್ಥೆಯು ಅನುಸರಿಸತಕ್ಕದ್ದು. ಈ ಉದ್ದೇಶಕ್ಕಾಗಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ)ಯ ಆಡಳಿತ ವ್ಯಾಪ್ತಿಗೆ ಬರುವ ಸಂಸ್ಥೆ (society) ಯಾದ ಇ–ಆಡಳಿತ ಕೇಂದ್ರ ಸೂಕ್ತ ಟೆಂಡರ್ {Request for Proposal (RFP)} ಅನ್ನು ತಯಾರಿಸಿ ಕಿಯಾನಿಕ್ಸ್‌ಗೆ ನೀಡತಕ್ಕದ್ದು ಹಾಗೂ ಅದನ್ನು ಕಿಯಾನಿಕ್ಸ್ ಸಂಸ್ಥೆಯು ಅನುಸರಿಸತಕ್ಕದ್ದು.

4. ಸದರಿ ಪರೀಕ್ಷೆಯನ್ನು ಸೂಕ್ತ ರೀತಿಯಲ್ಲಿ ಮತ್ತು ಸಕಾಲದಲ್ಲಿ ನಡೆಸುವ ಸಲುವಾಗಿ ಕಿಯಾನಿಕ್ಸ್ ಮತ್ತಿತರರೊಂದಿಗೆ ಸಮನ್ವಯ ಮಾಡಲು ಮತ್ತು ಉಸ್ತುವಾರಿ ಮಾಡಲು ಇ–ಆಡಳಿತ ಕೇಂದ್ರವನ್ನು ಸಮನ್ವಯ ಮಾಡುವ ಸಂಸ್ಥೆ (nodal agency) ಯನ್ನಾಗಿ ಈ ಮೂಲಕ ಪದನಾಮೀಕರಿಸಿದೆ.

5. ದಿನಾಂಕ: 24.01.2014ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ, ಮೇಲಿನ ಕಂಡಿಕೆ–1ರಲ್ಲಿ ಉಲ್ಲೇಖಿಸಿದ, ಸಭೆಯ ನಡವಳಿಗಳ ಪ್ರಕಾರ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ನಡೆಸಲು ಅಗತ್ಯ ಕ್ರಮಗಳನ್ನು ಇ–ಆಡಳಿತ ಕೇಂದ್ರದ ವತಿಯಿಂದ ತೆಗೆದುಕೊಳ್ಳತಕ್ಕದ್ದು.

6. ಸದರಿ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ನಡೆಸಲು ಆಗುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ "3451–00–090–2–0–059 ವಿದ್ಯುನ್ಮಾನ ಆಡಳಿತ ಯೋಜನೆ–ಇತರೆ ವೆಚ್ಚಗಳು (ಯೋಜನೆ)"ಯಡಿ ಭರಿಸತಕ್ಕದ್ದು.

7. ಆರ್ಥಿಕ ಇಲಾಖೆಯ ದಿನಾಂಕ: 13.03.2014ರ ಟಿಪ್ಪಣಿ ಸಂಖ್ಯೆ: ಆಇ 228 ವೆಚ್ಚ–12 2014ರನ್ವಯ ಆರ್ಥಿಕ ಇಲಾಖೆ ನೀಡಿದ ಸಹಮತಿಯಂತೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವೀಣಾ,**

ಪೀಠಾಧಿಕಾರಿ–1,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಇ–ಆಡಳಿತ)

**PR. 410**
**SC. 500**

## ಕಂದಾಯ ಸಚಿವಾಲಯ

**ವಿಷಯ :** ಭೂಸ್ವಾಧೀನ ಕಾಯ್ದೆ 2013 ರಂತೆ ಕೃಷ್ಣಾ ಮೇಲ್ದಂಡೆ ಯೋಜನೆಗೆ ಅಧಿಕಾರಿ ಪುನರ್ ಸ್ಥಾಪಿಸುವ ಕುರಿತು.

**ಓದಲಾಗಿದೆ :**

1. ಹೊಸ ಭೂಸ್ವಾಧೀನ ಕಾಯ್ದೆ 2013.
2. ಸನ್ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ದಿನಾಂಕ 12–12–2013 ರಂದು ಜರುಗಿದ ಸಭಾ ನಡವಳಿ.
3. ಮಹಾ ವ್ಯವಸ್ಥಾಪಕರು, ಪುಪು/ಭೂಸ್ವಾಧೀನ, ಕೃ.ಮೇ.ಯೋ., ಬಾಗಲಕೋಟೆ ಇವರ ಪತ್ರ ಸಂಖ್ಯೆ : ಮವ್ಯ/ಭೂಸ್ವಾ/ಸಿಬ್ಬಂದಿ/ವಹಿ–40/2013–14, ದಿನಾಂಕ 20–02–2014 ಮತ್ತು 24–02–2014.

**ಪ್ರಸ್ತಾವನೆ:**

"The Right to Fair Compensation and Transparency in Land Acquisition, Rehabilitation and Resettlement Act-2013" ನ್ನು ದಿನಾಂಕ 01-01-2014 ರಿಂದ ಜಾರಿಗೆ ಬಂದಿದ್ದು, ಅದರಲ್ಲಿ ಅಧಿಸೂಚನೆಗಳನ್ನು ಹೊರಡಿಸಲು ಮತ್ತು ಪುನರ್ವಸತಿಗಾಗಿ ಜಮೀನು ಭೂಸ್ವಾಧೀನಪಡಿಸಿಕೊಳ್ಳಲು ಈ ಕೆಳಗಿನಂತೆ ಕಾಯ್ದೆ ಕಲಂಗಳಿಗೆ ಅನುಗುಣವಾಗಿ ಅಧಿಕಾರ ನೀಡಲಾಗಿದೆ.

| ಅ.ನಂ. | ಭೂಸ್ವಾಧೀನ ಕಾಯ್ದೆ 2013 | ಉದ್ದೇಶ | ಅಧಿಕಾರ ನೀಡಿರುವುದು |
|---|---|---|---|
| 1 | ಕಲಂ 11 | ಪ್ರಾರಂಭಿಕ ಅಧಿಸೂಚನೆ | ಜಿಲ್ಲಾಧಿಕಾರಿಗಳಿಗೆ |
| 2 | ಕಲಂ 19 | ಅಂತಿಮ ಅಧಿಸೂಚನೆ | ಸರ್ಕಾರಕ್ಕೆ |
| 3 | ಕಲಂ 43 | ಪುನರ್ವಸತಿ ಮತ್ತು ಪುನರ್ ನಿರ್ಮಾಣ | ಆಡಳಿತಾಧಿಕಾರಿಗಳು |
| 4 | ಕಲಂ 45 | ಯೋಜನಾ ಹಂತದ ಪುನರ್ವಸತಿ ಮತ್ತು ಪುನರ್ ನಿರ್ಮಾಣ ಮೇಲ್ವಿಚಾರಣಾ ಸಮಿತಿ | ಜಿಲ್ಲಾಧಿಕಾರಿಗಳಿಗೆ |

ಕೃಷ್ಣಾ ಮೇಲ್ದಂಡೆ ಯೋಜನೆಯಡಿ 509-512, 512-515, 515-519.6 ಮೀಟರವರೆಗೆ ಭೂಸ್ವಾಧೀನಪಡಿಸಿಕೊಳ್ಳುವ ಬಗ್ಗೆ, ಭೂಸ್ವಾಧೀನ ಕಾಯ್ದೆ 1894 ರನ್ವಯ ಕಾಯ್ದೆ ಕಲಂ 4(1) ಅಧಿಸೂಚನೆ ಹೊರಡಿಸುವುದು ವಿಶೇಷ ಜಿಲ್ಲಾಧಿಕಾರಿಗಳಿಗೆ, ಕಲಂ 6(1) ಅಂತಿಮ ಅಧಿಸೂಚನೆ ಮಂಜೂರಿ ಹಾಗೂ ಎಲ್ಲಾ ಪುನರ್ವಸತಿ ಉಸ್ತುವಾರಿ ಕೆಲಸಗಳನ್ನು ಮಾನ್ಯ ಆಯುಕ್ತರು, ಪುನರ್ವಸತಿ ಪುನರ್‌ನಿರ್ಮಾಣ ಹಾಗೂ ಭೂಸ್ವಾಧೀನ, ಪದನಿಮಿತ್ತ ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ, ಕೃ.ಮೇ.ಯೋ., ಬಾಗಲಕೋಟೆ, ಇವರಿಗೆ, ಪುನರ್ವಸತಿ ಪುನರ್‌ನಿರ್ಮಾಣದ ಕೆಲಸಗಳನ್ನು ಪುನರ್ವಸತಿ ಅಧಿಕಾರಿಗಳಿಗೆ ವಹಿಸಿ, ಇದರ ಮೇಲ್ವಿಚಾರಣೆಯನ್ನು ವಿಶೇಷ ಜಿಲ್ಲಾಧಿಕಾರಿಗಳು ಹಾಗೂ ಸಮೂಹ ವ್ಯವಸ್ಥಾಪಕರು ವಹಿಸಿಕೊಂಡು ಸರ್ಕಾರದ ನಿರ್ದೇಶನದಂತೆ ಈವರೆಗೆ ಕೆಲಸ ನಿರ್ವಹಿಸಲಾಗುತ್ತಿದೆ. ಸದ್ಯ ಕೃಷ್ಣಾ ಮೇಲ್ದಂಡೆ ಯೋಜನೆಯ 3ನೇ ಹಂತದ ಎಫ್‌ಆರ್‌ಎಲ್ 524.256 ಮೀಟರಡಿ ಮುಳುಗಡೆಯಾಗುವ ಅಂದಾಜು 94640.00 ಎಕರೆ, ಪುನರ್ವಸತಿ ಕೇಂದ್ರ ನಿರ್ಮಾಣಕ್ಕಾಗಿ ಅಂದಾಜು 4315.00 ಎಕರೆ, ಮೂಲಭೂತ ಸೌಕರ್ಯ ಹಾಗೂ ಕಾಲುವೆಗಾಗಿ ಅಂದಾಜು 24685.00 ಎಕರೆ ಹೀಗೆ ಒಟ್ಟು 123640.00 ಎಕರೆ ಕ್ಷೇತ್ರ ಭೂಸ್ವಾಧೀನ ಮಾಡಿಕೊಳ್ಳುವುದಿದ್ದು, ಹೊಸ ಕಾಯ್ದೆ ಅನುಗುಣವಾಗಿ ಸಮರೋಪಾದಿಯಲ್ಲಿ ಕೆಲಸ ನಿರ್ವಹಿಸಬೇಕಾಗಿದೆ. ಉಲ್ಲೇಖ (2) ರಂತೆ ಸನ್ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ಕೃಷ್ಣಾ ಮೇಲ್ದಂಡೆ ಯೋಜನೆ, 3ನೇ ಹಂತಕ್ಕೆ ಸಂಬಂಧಿಸಿದಂತೆ ಉನ್ನತ ಮಟ್ಟದ ಅಧಿಕಾರಿಗಳ ಸಮಿತಿ ಸಭೆಯ ನಡವಳಿಯಲ್ಲಿ ತಿಳಿಸಿದಂತೆ ತೀವ್ರವಾಗಿ ಕ್ರಮ ಜರುಗಿಸಬೇಕಾಗಿರುವುದರಿಂದ, ಈ ಕೆಳಕಂಡಂತೆ ಭೂಸ್ವಾಧೀನ ಕಾಯ್ದೆ 2013ರ ಅನುಗುಣವಾಗಿ ಅಧಿಕಾರ ನೀಡಲು ಮಹಾ ವ್ಯವಸ್ಥಾಪಕರು, ಪುಪು/ಭೂಸ್ವಾಧೀನ, ಕೃ.ಮೇ.ಯೋಜನೆ, ಬಾಗಲಕೋಟೆ ಇವರು ಉಲ್ಲೇಖ (3)ರ ಪತ್ರದಲ್ಲಿ ವಿನಂತಿಸಿರುವರು.

| ಅ.ನಂ. | ಭೂಸ್ವಾಧೀನ ಕಾಯ್ದೆ 1894 | ಭೂಸ್ವಾಧೀನ ಕಾಯ್ದೆ 2013 | ಉದ್ದೇಶ | ಅಧಿಕೃತ ಪ್ರಾಧಿಕಾರ |
|---|---|---|---|---|
| 1 | ಕಲಂ 4(1) | ಕಲಂ 11 | ಪ್ರಾರಂಭಿಕ ಅಧಿಸೂಚನೆ | ವಿಶೇಷ ಜಿಲ್ಲಾಧಿಕಾರಿಗಳು |
| 2 | ಕಲಂ 6(1) | ಕಲಂ 19 | ಅಂತಿಮ ಅಧಿಸೂಚನೆ | ಆಯುಕ್ತರು, ಪುಪು/ಭೂಸ್ವಾಧೀನ, ಕೃ.ಮೇ.ಯೋ., ಬಾಗಲಕೋಟೆ |
| 3 | | ಕಲಂ 43 | ಪುನರ್ವಸತಿ ಮತ್ತು ಪುನರ್‌ನಿರ್ಮಾಣ | ಪುನರ್ವಸತಿ ಅಧಿಕಾರಿಗಳು/ ವಿಶೇಷ ಭೂಸ್ವಾಧೀನಾಧಿಕಾರಿಗಳು |
| 4 | | ಕಲಂ 45 | ಯೋಜನಾ ಹಂತದ ಪುನರ್ವಸತಿ ಮತ್ತು ಪುನರ್ ನಿರ್ಮಾಣ ಮೇಲ್ವಿಚಾರಣಾ ಸಮಿತಿ | ಮಹಾ ವ್ಯವಸ್ಥಾಪಕರು, ಪುನರ್ವಸತಿ ಮತ್ತು ಪುನರ್‌ನಿರ್ಮಾಣ/ ಭೂಸ್ವಾಧೀನ, ಕೃ.ಮೇ.ಯೋ., ಬಾಗಲಕೋಟೆ |

ಮೇಲೆ ಪ್ರಸ್ತಾಪಿಸಿದಂತೆ, ಕೃಷ್ಣಾ ಮೇಲ್ದಂಡೆ ಯೋಜನೆ ವ್ಯಾಪ್ತಿಯಲ್ಲಿ ಭೂಸ್ವಾಧೀನ ಹಾಗೂ ಪುನರ್ವಸತಿ ಮತ್ತು ಪುನರ್‌ನಿರ್ಮಾಣ ಆಡಳಿತದ ಹಿತದೃಷ್ಟಿಯಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 18 ಆರ್‌ಇಹೆಚ್ 2014, ಬೆಂಗಳೂರು, ದಿನಾಂಕ: 06-02-2014**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ "The Right to Fair Compensation and Transparency in Land Acquisition, Rehabilitation and Resettlement Act-2013" ರ ಕಲಂ 11, 19, 43 ಹಾಗೂ 45 ರಂತೆ ಅಧಿಕಾರ ಚಲಾಯಿಸಲು ಈ ಕೆಳಗಿನಂತೆ ಅನುಮತಿ ನೀಡಿ ಆದೇಶಿಸಿದೆ.

| ಅ.ನಂ. | ಭೂಸ್ವಾಧೀನ ಕಾಯ್ದೆ 2013 | ಉದ್ದೇಶ | ಅಧಿಕೃತ ಪ್ರಾಧಿಕಾರ (ಕೃಷ್ಣಾ ಮೇಲ್ದಂಡೆ ಯೋಜನೆ) |
|---|---|---|---|
| 1 | ಕಲಂ 11 | ಪ್ರಾರಂಭಿಕ ಅಧಿಸೂಚನೆ | ವಿಶೇಷ ಜಿಲ್ಲಾಧಿಕಾರಿಗಳು ಹಾಗೂ ಸಮೂಹ ವ್ಯವಸ್ಥಾಪಕರು, ಕೃ.ಮೇ.ಯೋ., ಬಾಗಲಕೋಟೆ |

| ಅ.ನಂ. | ಭೂಸ್ವಾಧೀನ ಕಾಯ್ದೆ 2013 | ಉದ್ದೇಶ | ಅಧಿಕೃತ ಪ್ರಾಧಿಕಾರ (ಕೃಷ್ಣಾ ಮೇಲ್ದಂಡೆ ಯೋಜನೆ) |
|---|---|---|---|
| 2 | ಕಲಂ 19 | ಅಂತಿಮ ಅಧಿಸೂಚನೆ | ಆಯುಕ್ತರು, ಪುಪು/ಭೂಸ್ವಾಧೀನ, ಕೃ.ಮೇ.ಯೋ., ಬಾಗಲಕೋಟೆ |
| 3 | ಕಲಂ 43 | ಪುನರ್ವಸತಿ ಮತ್ತು ಪುನರ್ ನಿರ್ಮಾಣ | ಪುನರ್ವಸತಿ ಅಧಿಕಾರಿಗಳು/ ವಿಶೇಷ ಭೂಸ್ವಾಧೀನಾಧಿಕಾರಿಗಳು |
| 4 | ಕಲಂ 45 | ಯೋಜನಾ ಹಂತದ ಪುನರ್ವಸತಿ ಮತ್ತು ಪುನರ್ ನಿರ್ಮಾಣ ಮೇಲ್ವಿಚಾರಣಾ ಸಮಿತಿ | ಮಹಾ ವ್ಯವಸ್ಥಾಪಕರು, ಪುನರ್ವಸತಿ ಮತ್ತು ಪುನರ್ ನಿರ್ಮಾಣ/ಭೂಸ್ವಾಧೀನ, ಕೃ.ಮೇ.ಯೋ., ಬಾಗಲಕೋಟೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಲಲಿತಾ ಹೆಚ್. ಹಂದಿಗೋಳ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ.
(ಭೂ ಸ್ವಾಧೀನ–2 ಮತ್ತು ಪುನರ್ವಸತಿ)

**PR. 411**
**SC. 200**

## ಕಂದಾಯ ಸಚಿವಾಲಯ

### ತಿದ್ದುಪಡಿ

### ಸಂಖ್ಯೆ : ಕಂಇ 133 ಆರ್‌ಇಹೆಚ್ 2013, ಬೆಂಗಳೂರು, ದಿನಾಂಕ 12–03–2014

ಸರ್ಕಾರದ ಆದೇಶ ಸಂಖ್ಯೆ : ಕಂಇ 133 ಆರ್.ಇ.ಹೆಚ್ 2013 (ಭಾಗ–2), ದಿನಾಂಕ 29–10–2013ರ ಕ್ರಮ ಸಂಖ್ಯೆ (21) ರಲ್ಲಿ ಮುಖ್ಯ ಇಂಜಿನಿಯರ್, ಬಾಗಲಕೋಟೆ ಪಟ್ಟಣ ಅಭಿವೃದ್ಧಿ ಪ್ರಾಧಿಕಾರ ಇವರನ್ನು ಸದಸ್ಯ–ಕಾರ್ಯದರ್ಶಿಯನ್ನಾಗಿ ನೇಮಕ ಮಾಡಿ ಹೊರಡಿಸಿದ್ದ ಆದೇಶವನ್ನು ಮಾರ್ಪಡಿಸಿ, ಆಯುಕ್ತರು, ಕೃಷ್ಣಾ ಮೇಲ್ದಂಡೆ ಯೋಜನೆ, ಭೂಸ್ವಾಧೀನ ಪುನರ್ವಸತಿ ಮತ್ತು ಪುನರ್‌ನಿರ್ಮಾಣ, ಬಾಗಲಕೋಟೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದಸ್ಯ–ಕಾರ್ಯದರ್ಶಿಯನ್ನಾಗಿ ನೇಮಿಸಲಾಗಿದೆ.

ಉಳಿದಂತೆ ದಿನಾಂಕ 29–10–2013ರ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಲಲಿತಾ ಹೆಚ್. ಹಂದಿಗೋಳ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ.
(ಭೂ ಸ್ವಾಧೀನ–2 ಮತ್ತು ಪುನರ್ವಸತಿ)

**PR. 412**
**SC. 500**

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಕಾಇ 134 ಎಲ್‌ಎಸ್‌ಐ 2014, ಬೆಂಗಳೂರು, ದಿನಾಂಕ: 01ನೇ ಏಪ್ರಿಲ್, 2014

ಆದೇಶ ಸಂಖ್ಯೆ: ಕಾಇ 356 ಎಲ್‌ಎಸ್‌ಐ 95 ದಿನಾಂಕ: 04–09–2006ರನ್ವಯ ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ 6 ವರ್ಷಗಳ ಮತ್ತು 13 ವರ್ಷಗಳ ಸೇವೆಯನ್ನು ಪೂರೈಸಿದ ವೈದ್ಯಾಧಿಕಾರಿಗಳಿಗೆ ಕಾಲಬದ್ಧ ಪದೋನ್ನತಿ ಸೌಲಭ್ಯವನ್ನು ವಿಸ್ತರಿಸಲಾಗಿದೆ. ಹಾಗೂ ಅಧಿಸೂಚನೆ ಸಂಖ್ಯೆ: ಕಾಇ 176 ಎಲ್‌ಎಸ್‌ಐ 2006, ದಿನಾಂಕ: 07–12–2007ರಲ್ಲಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರೂಪಿಸಿದ ನಂತರ ಮೇಲ್ಕಂಡ ಕಾಲಬದ್ಧ ಪದೋನ್ನತಿ ಸೌಲಭ್ಯವನ್ನು ಕ್ರಮಬದ್ಧಗೊಳಿಸಲಾಗಿದೆ. ಅದರಂತೆ **ಡಾ॥ ಶ್ರೀಶೈಲಾ ಎಸ್.ಬಿ. ಕಿರಿಯ ತಜ್ಞರು,** ಕಾರ್ಮಿಕರ ರಾಜ್ಯ ವಿಮಾ ಚಿಕಿತ್ಸಾಲಯ, ದಾಸರಹಳ್ಳಿ, ಬೆಂಗಳೂರು ಇವರು ದಿನಾಂಕ: 05–06–2012ಕ್ಕೆ 13 ವರ್ಷಗಳ ಅರ್ಹ ಸೇವೆಯನ್ನು ಪೂರೈಸಿರುವುದರಿಂದ ಮೇಲ್ಕಂಡ ಆದೇಶಗಳಲ್ಲಿನ ಸೌಲಭ್ಯವನ್ನು ಈ ಕೂಡಲೇ ಜಾರಿಗೆ ಬರುವಂತೆ ವಿಸ್ತರಿಸಿ ದಿನಾಂಕ: 05–06–2012ರಿಂದಲೇ ಅನ್ವಯವಾಗುವಂತೆ ಇವರ ಪದನಾಮವನ್ನು **'ಹಿರಿಯ ತಜ್ಞರು'** ಎಂದು ಪುನರ್ ಪದನಾಮೀಕರಣಗೊಳಿಸಿ, ವೇತನ ಶ್ರೇಣಿ ₹ 18150–26925 (ಪರಿಷ್ಕೃತ ವೇತನ ಶ್ರೇಣಿ ₹ 36300–53850) ರಲ್ಲಿ 2ನೇ ಕಾಲಬದ್ಧ ಪದೋನ್ನತಿ ಸೌಲಭ್ಯವನ್ನು ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಮಂಜೂರು ಮಾಡಲಾಗಿದೆ :–

1) ಈ ಆದೇಶದನ್ವಯ ಬಡ್ತಿ ಹೊಂದಿದ ಈ ವೈದ್ಯರ ಜ್ಯೇಷ್ಠತೆಯು ಇವರು ಬಡ್ತಿ ಹೊಂದುವ ಪೂರ್ವದಲ್ಲಿದ್ದ ಹುದ್ದೆಯಲ್ಲಿ ಇರುವಂತೆಯೇ ಮುಂದುವರೆಯುತ್ತದೆ.

2) ಬಡ್ತಿ ಹೊಂದಿದ ಸದರಿ ವೈದ್ಯರು ಮುಂದಿನ ಆದೇಶದವರೆಗೆ ಸದ್ಯಕ್ಕೆ ಇವರು ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳದಲ್ಲಿಯೇ ಮುಂದುವರೆಯಲಿದ್ದು, ಯಾವುದೇ ರೀತಿಯ ಸ್ಥಾನಪಲ್ಲಟ ಹೊಂದುವುದಿಲ್ಲ.

3) ಇವರ ಕಾಲಬದ್ಧ ಪದೋನ್ನತಿಯು ಸರ್ಕಾರದ ಆದೇಶ ಸಂಖ್ಯೆ: ಕಾಇ 356 ಎಲ್ಎಸ್ಐ 95, ದಿನಾಂಕ: 04–09–2006 ಮತ್ತು ಅಧಿಸೂಚನೆ ಸಂಖ್ಯೆ: ಕಾಇ 176 ಎಲ್ಎಸ್ಐ 2006, ದಿನಾಂಕ: 07–12–2007ರ ಕರ್ನಾಟಕ ಕಾರ್ಮಿಕರ ರಾಜ್ಯ ವಿಮಾ ಯೋಜನೆ (ವೈದ್ಯಕೀಯ ಸೇವಾ (ನೇಮಕಾತಿ) ನಿಯಮಗಳು 2007ರಲ್ಲಿನ ಎಲ್ಲಾ ಷರತ್ತಿಗೊಳಪಟ್ಟಿದೆ.

4) ಯಾವುದೇ ಹಂತ ಅಥವಾ ಸಂದರ್ಭದಲ್ಲಿ ಮತ್ತು ಯಾವುದೇ ಕಾರಣಗಳಿಂದಾಗಿ ಸದರಿ ಕಾಲಬದ್ಧ ಪದೋನ್ನತಿಯ ಆದೇಶವನ್ನು ಮಾರ್ಪಡಿಸುವ ಅಥವಾ ಹಿಂತೆಗೆದುಕೊಳ್ಳುವ ಮತ್ತು ಈ ವೈದ್ಯರಿಗೆ ಹಿಂಬಡ್ತಿ ನೀಡುವ ಸಂಪೂರ್ಣ ಹಕ್ಕು ಮತ್ತು ಅಧಿಕಾರವನ್ನು ಸರ್ಕಾರವು ಕಾಯ್ದಿರಿಸಿಕೊಂಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ. ನಾಗೇಶ ರಾವ್,**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ

(ಕಾರಾವಿ ಯೋ ವೈ. ಸೇವೆಗಳು)

P.R. 413
SC 50

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಕಾಇ 95 ಎಲ್ಎಸ್ಐ 2014, ಬೆಂಗಳೂರು, ದಿನಾಂಕ: 20ನೇ ಮಾರ್ಚ್, 2014

ಆದೇಶ ಸಂಖ್ಯೆ: ಕಾಇ 356 ಎಲ್ಎಸ್ಐ 95 ದಿನಾಂಕ: 04–09–2006ರನ್ವಯ ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ 6 ವರ್ಷಗಳ ಮತ್ತು 13 ವರ್ಷಗಳ ಸೇವೆಯನ್ನು ಪೂರೈಸಿದ ವೈದ್ಯಾಧಿಕಾರಿಗಳಿಗೆ ಕಾಲಬದ್ಧ ಪದೋನ್ನತಿ ಸೌಲಭ್ಯವನ್ನು ವಿಸ್ತರಿಸಲಾಗಿದೆ. ಹಾಗೂ ಅಧಿಸೂಚನೆ ಸಂಖ್ಯೆ: ಕಾಇ 176 ಎಲ್ಎಸ್ಐ 2006, ದಿನಾಂಕ: 07–12–2007ರಲ್ಲಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರೂಪಿಸಿದ ನಂತರ ಮೇಲ್ಕಂಡ ಕಾಲಬದ್ಧ ಪದೋನ್ನತಿ ಸೌಲಭ್ಯವನ್ನು ಕ್ರಮಬದ್ಧಗೊಳಿಸಲಾಗಿದೆ. ಅದರಂತೆ **ಡಾ|| ಬೆಳಗಲಿ ವಿಜಯಲಕ್ಷ್ಮಿ ಪಂಪಕವಿ, ಕಿರಿಯ ತಜ್ಞರು,** ಕಾರ್ಮಿಕರ ರಾಜ್ಯ ವಿಮಾ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು ಇವರು ದಿನಾಂಕ: 12–07–2013ಕ್ಕೆ 13 ವರ್ಷಗಳ ಅರ್ಹ ಸೇವೆಯನ್ನು ಪೂರೈಸಿರುವುದರಿಂದ ಮೇಲ್ಕಂಡ ಆದೇಶಗಳಲ್ಲಿನ ಸೌಲಭ್ಯವನ್ನು ಈ ಕೂಡಲೇ ಜಾರಿಗೆ ಬರುವಂತೆ ವಿಸ್ತರಿಸಿ ದಿನಾಂಕ: 12–03–2013ರಿಂದಲೇ ಅನ್ವಯವಾಗುವಂತೆ ಇವರ ಪದನಾಮವನ್ನು **'ಹಿರಿಯ ತಜ್ಞರು'** ಎಂದು ಪುನರ್ ಪದನಾಮೀಕರಣಗೊಳಿಸಿ, ವೇತನ ಶ್ರೇಣಿ ₹ 18150–26925 (ಪರಿಷ್ಕೃತ ವೇತನ ಶ್ರೇಣಿ ₹ 36300–53850) ರಲ್ಲಿ 2ನೇ ಕಾಲಬದ್ಧ ಪದೋನ್ನತಿ ಸೌಲಭ್ಯವನ್ನು ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಮಂಜೂರು ಮಾಡಲಾಗಿದೆ :–

1) ಈ ಆದೇಶದನ್ವಯ ಬಡ್ತಿ ಹೊಂದಿದ ಈ ವೈದ್ಯರ ಜ್ಯೇಷ್ಠತೆಯು ಇವರು ಬಡ್ತಿ ಹೊಂದುವ ಪೂರ್ವದಲ್ಲಿದ್ದ ಹುದ್ದೆಯಲ್ಲಿ ಇರುವಂತೆಯೇ ಮುಂದುವರೆಯುತ್ತದೆ.

2) ಬಡ್ತಿ ಹೊಂದಿದ ಸದರಿ ವೈದ್ಯರು ಮುಂದಿನ ಆದೇಶದವರೆಗೆ ಸದ್ಯಕ್ಕೆ ಇವರು ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳದಲ್ಲಿಯೇ ಮುಂದುವರೆಯಲಿದ್ದು, ಯಾವುದೇ ರೀತಿಯ ಸ್ಥಾನಪಲ್ಲಟ ಹೊಂದುವುದಿಲ್ಲ.

3) ಇವರ ಕಾಲಬದ್ಧ ಪದೋನ್ನತಿಯು ಸರ್ಕಾರದ ಆದೇಶ ಸಂಖ್ಯೆ: ಕಾಇ 356 ಎಲ್ಎಸ್ಐ 95, ದಿನಾಂಕ: 04–09–2006 ಮತ್ತು ಅಧಿಸೂಚನೆ ಸಂಖ್ಯೆ: ಕಾಇ 176 ಎಲ್ಎಸ್ಐ 2006, ದಿನಾಂಕ: 07–12–2007ರ ಕರ್ನಾಟಕ ಕಾರ್ಮಿಕರ ರಾಜ್ಯ ವಿಮಾ ಯೋಜನೆ (ವೈದ್ಯಕೀಯ ಸೇವಾ (ನೇಮಕಾತಿ) ನಿಯಮಗಳು 2007ರಲ್ಲಿನ ಎಲ್ಲಾ ಷರತ್ತಿಗೊಳಪಟ್ಟಿದೆ.

4) ಯಾವುದೇ ಹಂತ ಅಥವಾ ಸಂದರ್ಭದಲ್ಲಿ ಮತ್ತು ಯಾವುದೇ ಕಾರಣಗಳಿಂದಾಗಿ ಸದರಿ ಕಾಲಬದ್ಧ ಪದೋನ್ನತಿಯ ಆದೇಶವನ್ನು ಮಾರ್ಪಡಿಸುವ ಅಥವಾ ಹಿಂತೆಗೆದುಕೊಳ್ಳುವ ಮತ್ತು ಈ ವೈದ್ಯರಿಗೆ ಹಿಂಬಡ್ತಿ ನೀಡುವ ಸಂಪೂರ್ಣ ಹಕ್ಕು ಮತ್ತು ಅಧಿಕಾರವನ್ನು ಸರ್ಕಾರವು ಕಾಯ್ದಿರಿಸಿಕೊಂಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ. ನಾಗೇಶ ರಾವ್,**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ

(ಕಾರಾವಿ ಯೋ ವೈ. ಸೇವೆಗಳು)

P.R. 414
SC 50

## FOOD, CIVIL SUPPLIES AND CONSUMER AFFAIRS SECRETARIAT

**Sub** : Disposal of Maize procured under Minimum Support Price for KMS 2013-14 by the State Government through e-tenders - Constitution of Committee - reg.

**Read** : Official Memorandum No.7/10/2013-Py.III, dated 21.3.2014 of Ministry of Consumer Affairs, Food and Public Distribution, Dept. of Food and Public Distribution, Government of India, New Delhi.

**PREAMBLE:**

The three procurement agencies of state government have procured a total quantity of 7,07,839.212 MTs of Maize under Minimum Support Price at the rate announced by the Government of India for KMS 2013-14. The Government of India has accepted the proposal of the State Government to dispose of the procured maize by calling tenders in consultation with the Food Corporation of India.

As per the revised guidelines issued by the Government of India for distribution and disposal of coarse grains procured by State Agencies vide reference read above, a Committee has to be constituted to monitor the disposal, ascertain the quality of stocks, fixing of reserve price etc., Accordingly, the State Government has decided to constitute a committee for this purpose and hence the following order:

**GOVERNMENT ORDER NO.FCS 13 RPR 2013, BANGALORE, DATED 25.4.2014**

To monitor the disposal of Maize, fixing of reserve price, a Committee is constituted consisting of following members:

| | | |
|---|---|---|
| 1 | Managing Director, Karnataka Food and Civil Supplies Corporation. | - Chairperson |
| 2 | Managing Director, Karnataka State Warehousing Corporation. | - Member |
| 3 | Managing Director, Karnataka State Co-operative Marketing Federation. | - Member |
| 4 | Sri. T. Bipin Chakravarthy, Deputy General Manager (Finance & Accounts) Regional Office, Food Corporation of India, Bangalore | - Member |
| 5 | Sri. V. Jayakumar, Assistant General Manager (Quality Control) Regional Office, Food Corporation of India, Bangalore | - Member |
| 6 | Sri. H.C. Ramesh Chand, Executive Vice-president (South), NCDEX | - Special Invitee |

Committee is entrusted with the following responsibilities:

(a) The Food Corporation of India would send the schedule of inspection to the three procurement agencies in order that the respective officers of the agencies are present at the time of inspection. The Food Corporation of India and the procuring agencies would depute adequate personnel in order that the inspection is completed by 30.04.2014;

(b) The committee would also propose a formula for fixing the reserve price. The reserve price cannot be constant and will have to vary based upon the location of the warehouse where the stocks are to be sold and the period in which the stocks are to be sold. While assessing the reserve price, the committee could evaluate the APMC rates for the past three months and the rates in futures markets also;

(c) All tenders for disposal of maize would be done through e-Tender and there will be no manual tenders for the disposal of maize.

(d) The KFCSC would be the agency to call for the tenders with the assistance/support of NCDEX. The bids would be called for lot-wise. Each lot would mean the stocks of a particular procurement centre. If the stocks in a particular centre are too large, then the stocks would be split and offered for bid separately.

(e) Once bids are called, the committee would meet regularly and evaluate the bids within two days and make recommendations to the State Government for approval of the bids.

(f) NCDEX is permitted to empanel buyers.

By Order and in the name of the Governor of Karnataka,

**A.R. VIJAYANANDA SHARMA,**
Under Secretary to Government,
Food, Civil Supplies and Consumer Affairs Department

**PR 415**
**SC 200**

## ತೋಟಗಾರಿಕೆ ಸಚಿವಾಲಯ

**ವಿಷಯ :** 11ನೇ ಪಂಚವಾರ್ಷಿಕ ಯೋಜನೆಯಲ್ಲಿ ರೇಷ್ಮೆ ಇಲಾಖೆಯಲ್ಲಿ ಗೂಡಿನ ನಂತರದ ಚಟುವಟಿಕೆ ಯೋಜನೆಗಳನ್ನು ಕೇಂದ್ರ ಪುರಸ್ಕೃತ ಕೆಟಲಿಟಕ್ ಅಭಿವೃದ್ಧಿ ಯೋಜನೆಯಡಿಯಲ್ಲಿ ಅನುಷ್ಠಾನಗೊಳಿಸುವ ಬಗ್ಗೆ ಸಂಬಂಧ ಫಲಾನುಭವಿಗಳಿಗೆ ಸೂಚಿತ ಮಾರ್ಗದರ್ಶನಗಳಂತೆ Payees Receipt ಮೂಲಕ ಸಹಾಯಧನವನ್ನು ಬಿಡುಗಡೆ ಮಾಡುವ ಕುರಿತು

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ತೋಇ 103 ರೇಕೃವಿ 2013, ದಿನಾಂಕ: 05-09-2013
2. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ: ಯೋಜನೆ/ಪಿಎಸ್1/ಆ/ಭಾ/ಹೊಕ/111/70/2013-14, ದಿನಾಂಕ: 26-12-2013, 13-01-2014 ಮತ್ತು ಪತ್ರ ಸಂಖ್ಯೆ: ರೇಉಕೋ/ತಾ6/ಮಎಂ/ರಾಮನಗರ/16(1ಅ)/12-13, ದಿನಾಂಕ: 20/21-02-2014

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 05–09–2013ರ ಆದೇಶದಲ್ಲಿ ಮೈಸೂರು ಆರ್ಥಿಕ ಅಧಿಕಾರಿಗಳ ಕೈಪಿಡಿಯ ನಿಯಮ 5ರಲ್ಲಿ ಯಾವುದೇ ಪ್ರಾಧಿಕಾರವು ತನಗೆ ನೀಡಿದ ಅಧಿಕಾರವನ್ನು ಇತರೇ ಪ್ರಾಧಿಕಾರಕ್ಕೆ ಅಥವಾ ಕೆಳಗಿನ ಅಧಿಕಾರಿಗಳಿಗೆ ನೀಡಲು ಅವಕಾಶವಿರುವುದಿಲ್ಲ ಮತ್ತು ಸರ್ಕಾರ ಮಾತ್ರ ಅಂತಹ ಅಧಿಕಾರವನ್ನು ಪ್ರತ್ಯಾಯೋಜಿಸಬಹುದಾಗಿರುತ್ತದೆ. ಆದ್ದರಿಂದ ವಿಕೇಂದ್ರೀಕರಣ ಮತ್ತು ಆರ್ಥಿಕ ಪ್ರತ್ಯಾಯೋಜನೆಯನ್ನು ನೀಡಿ ಇಲಾಖೆಯು ಕ್ಷೇತ್ರಾಧಿಕಾರಿಗಳಿಗೆ ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೇ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಹೊರಡಿಸಿರುವ ಮೇಲೆ ನಡವಳಿಗಳನ್ನು ಹಿಂದಕ್ಕೆ ಪಡೆಯಲಾಗಿದೆ ಹಾಗೂ ಫಲಾನುಭವಿ ಆಧಾರಿತ ಕಾರ್ಯಕ್ರಮಗಳಿಗೆ ಸಹಾಯಧನ/ಪ್ರೋತ್ಸಾಹಧನ ಮತ್ತು ಉತ್ಪಾದಕತೆ ಮತ್ತು ಗುಣಮಟ್ಟದ ಆಧಾರದ ಮೇಲೆ ಗೂಡಿಗೆ ಪ್ರೋತ್ಸಾಹಧನ ಇವುಗಳಿಗೆ ಸಂಬಂಧಿಸಿದಂತೆ ಆರ್ಥಿಕ ಅಧಿಕಾರದ ಪ್ರತ್ಯಾಯೋಜನೆಯನ್ನು ರೇಷ್ಮೆ ಸಹಾಯಕ ನಿರ್ದೇಶಕರ ಮಟ್ಟದವರೆಗೆ ಮಾತ್ರ ನೀಡಿ ಸರ್ಕಾರವು ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ: 26–12–2013, 13–01–2014 ಮತ್ತು 20/21–02–2014 ಪತ್ರಗಳಲ್ಲಿ 11ನೇ ಪಂಚವಾರ್ಷಿಕ ಯೋಜನೆಯಲ್ಲಿ ಕೆಳಕಂಡ ಗೂಡಿನ ನಂತರದ ಚಟುವಟಿಕೆ ಕಾರ್ಯಕ್ರಮಗಳನ್ನು ರಾಜ್ಯ ಮತ್ತು ಕೇಂದ್ರ ರೇಷ್ಮೆ ಮಂಡಳಿ ಸಹಯೋಗದೊಂದಿಗೆ ಅನುಷ್ಠಾನಗೊಳಿಸಲು ಕಾರ್ಯಕ್ರಮಗಳನ್ನು/ಯೋಜನೆಗಳನ್ನು ಈಗಾಗಲೇ ರೂಪಿಸಲಾಗಿದೆ. ಗುರುತಿಸಿರುವ ಯೋಜನೆ/ಕಾರ್ಯಕ್ರಮಗಳನ್ನು 11ನೇ ಪಂಚವಾರ್ಷಿಕ ಯೋಜನೆಯಲ್ಲಿ ಮುಂದುವರೆಸಿ ಕಾರ್ಯಕ್ರಮಗಳಿಗೆ ಫಲಾನುಭವಿ ಪೂರಕ ಅನುದಾನಗಳನ್ನು ಸಹ ಪ್ರಸ್ತುತ 2013–14ನೇ ಸಾಲಿಗೆ ಕಲ್ಪಿಸಿಕೊಳ್ಳಲಾಗಿದೆ ಮತ್ತು ಇಂತಹುದೇ ಯೋಜನೆಗಳು 12ನೇ ಪಂಚವಾರ್ಷಿಕ ಯೋಜನೆ ಅಂತ್ಯದವರೆಗೂ ಅನುಷ್ಠಾನದಲ್ಲಿರುತ್ತದೆ.

ಕಾರ್ಯಕ್ರಮ ಅನುಷ್ಠಾನಗೊಳಿಸಲು ಕೇಂದ್ರ ರೇಷ್ಮೆ ಮಂಡಳಿಯ ಕೆಟಲಿಟಿಕ್ ಅಭಿವೃದ್ಧಿ ಯೋಜನೆಯ 11ನೇ ಯೋಜನೆ 2007–12ಕ್ಕೆ ಸಂಬಂಧಿಸಿದಂತೆ ಫಲಾನುಭವಿ ಸಹಾಯಧನ ಬಿಡುಗಡೆ ಮಾಡುವ ಬಗ್ಗೆ ಮಾರ್ಗದರ್ಶನಗಳನ್ನು ಹೊರಡಿಸಿದ್ದು ಮತ್ತು ಸಿ.ಎಸ್.ಟಿ.ಆರ್.ಐ. ಸಹ ಗೂಡಿನ ನಂತರದ ಚಟುವಟಿಕೆ ಕಾರ್ಯಕ್ರಮ ಅನುಷ್ಠಾನಗೊಳಿಸಲು ಮಾರ್ಗದರ್ಶನಗಳನ್ನು ಹೊರಡಿಸಿರುತ್ತದೆ. ಸಿಡಿಪಿ ಯೋಜನೆಯಡಿ ಯಂತ್ರೋಪಕರಣಗಳ ಘಟಕ ದರದ ಶೇ. 25ರ ಪಾಲು ರಾಜ್ಯ ಸರ್ಕಾರದ್ದಾಗಿರುತ್ತದೆ. ರಾಜ್ಯ ಯೋಜನೆಯಡಿ ಯಂತ್ರೋಪಕರಣಗಳ ಘಟಕ ದರದ ಶೇಕಡ 75ರಷ್ಟು ರಾಜ್ಯದ ಪಾಲಾಗಿರುತ್ತದೆ.

ಪ್ರಸ್ತುತ ಆರ್ಥಿಕ ಪ್ರತ್ಯಾಯೋಜನೆಗಳಲ್ಲಿ ನೇರವಾಗಿ ಸಾಮಾಗ್ರಿ/ಯಂತ್ರೋಪಕರಣಗಳ ಸರಬರಾಜುದಾರರಿಗೆ ಇಲಾಖಾ ವತಿಯಿಂದ ಸಹಾಯಧನ ಮಂಜೂರು ಮಾಡಿ ಬಿಡುಗಡೆ ಮಾಡುವ ವಿಶೇಷ ಅಧಿಕಾರ ಇರುವುದಿಲ್ಲ. ಆದುದರಿಂದ ಮುಂದೆ ಉದ್ಭವಿಸಬಹುದಾದ ಲೆಕ್ಕ ಸಂದಿಗ್ಧತೆಯನ್ನು ನಿವಾರಿಸಿಕೊಳ್ಳಲು 11ನೇ ಮತ್ತು 12ನೇ ಪಂಚವಾರ್ಷಿಕ ಯೋಜನೆಯಲ್ಲಿ ಅನುಷ್ಠಾನಗೊಂಡಿರುವ/ಅನುಷ್ಠಾನಗೊಳ್ಳುವ **1. ಸ್ವಯಂ ಚಾಲಿತ ಘಟಕದ ಯಂತ್ರೋಪಕರಣಗಳ ವೆಚ್ಚ 2. ಮಲ್ಟಿ ಎಂಡ್ ರೀಲಿಂಗ್ ಮೆಷಿನ್ ವೆಚ್ಚ** ಕಾರ್ಯಕ್ರಮಗಳಿಗೆ ಕೇಂದ್ರ ರೇಷ್ಮೆ ಮಂಡಳಿಯ ಅನುಮೋದಿತ ಸ್ಥಳೀಯ ಹಾಗೂ ವಿದೇಶಿ ಯಂತ್ರೋಪಕರಣಗಳ ಸರಬರಾಜುದಾರರಿಗೆ ನೇರವಾಗಿ Payees Receipt ಮುಖಾಂತರ ಖಜಾನೆಯಿಂದ ಸೆಳೆದು ಯಂತ್ರೋಪಕರಣಗಳ ಸರಬರಾಜುದಾರರಿಗೆ ವಿತರಿಸಲು ರೇಷ್ಮೆ ಸಹಾಯಕ ನಿರ್ದೇಶಕರು, ಗೂಡಿನ ನಂತರದ ಚಟುವಟಿಕೆರವರಿಗೆ ಅಧಿಕಾರ ನೀಡಿ ಆದೇಶ ಹೊರಡಿಸುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಹಾಗೂ ರೇಷ್ಮೆ ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ರೇಷ್ಮೆ ಇಲಾಖೆಯ ಫಲಾನುಭವಿ ಆಧಾರಿತ ಕಾರ್ಯಕ್ರಮಗಳಿಗೆ ಸಹಾಯಧನ/ಪ್ರೋತ್ಸಾಹಧನ ಮತ್ತು ಉತ್ಪಾದಕತೆ ಮತ್ತು ಗುಣಮಟ್ಟದ ಆಧಾರದ ಮೇಲೆ ಗೂಡಿಗೆ ಪ್ರೋತ್ಸಾಹಧನ ಇವುಗಳಿಗೆ ಸಂಬಂಧಿಸಿದಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರಿಗೆ ಸಹಾಯಧನ ನೀಡಲು ಪೂರ್ಣಾಧಿಕಾರವಿರುವುದರಿಂದ, ಸಹಾಯಧನದ ಮೊತ್ತ ರೂ. 75.00 ಲಕ್ಷಗಳನ್ನು Payees Receipt ಮೇಲೆ ಸೆಳೆದು ಉಪಯೋಗಿಸಲು ಅನುಮತಿ ನೀಡಲು ಸರ್ಕಾರವು ನಿರ್ಧರಿಸಿರುವ ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ತೋಇ 250 ರೇಕೃವಿ 2013, ಬೆಂಗಳೂರು, ದಿನಾಂಕ: 22ನೇ ಮಾರ್ಚ್, 2014**

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಹಾಗೂ ರೇಷ್ಮೆ ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ರೇಷ್ಮೆ ಇಲಾಖೆಯ ಫಲಾನುಭವಿ ಆಧಾರಿತ ಕಾರ್ಯಕ್ರಮಗಳಿಗೆ ಸಹಾಯಧನ/ಪ್ರೋತ್ಸಾಹಧನ ಮತ್ತು ಉತ್ಪಾದಕತೆ ಮತ್ತು ಗುಣಮಟ್ಟದ ಆಧಾರದ ಮೇಲೆ ಗೂಡಿಗೆ ಪ್ರೋತ್ಸಾಹಧನ ಇವುಗಳಿಗೆ ಸಂಬಂಧಿಸಿದಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರಿಗೆ ಸಹಾಯಧನ ನೀಡಲು ಪೂರ್ಣಾಧಿಕಾರವಿರುವುದರಿಂದ, ಸಹಾಯಧನದ ಮೊತ್ತ ರೂ. 75.00 (ಎಪ್ಪತ್ತೈದು ಲಕ್ಷಗಳು) ಲಕ್ಷಗಳನ್ನು Payees Receipt ಮೇಲೆ ಸೆಳೆದು ಉಪಯೋಗಿಸಲು ಅನುಮತಿ ನೀಡಿ ಸರ್ಕಾರವು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 53 ವೆಚ್ಚ–4/2014, ದಿನಾಂಕ: 22–03–2014ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಬಿ. ವಿಜಯಕುಮಾರ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ತೋಟಗಾರಿಕೆ ಇಲಾಖೆ (ರೇಷ್ಮೆ)

**P.R. 416**

**SC 50**

## ತೋಟಗಾರಿಕೆ ಸಚಿವಾಲಯ

**ವಿಷಯ :** ತೋಟಗಾರಿಕೆ ಇಲಾಖೆಯ ವಿವಿಧ ತೋಟಗಾರಿಕೆ ಕ್ಷೇತ್ರ ಮತ್ತು ನರ್ಸರಿಗಳ ಫಸಲನ್ನು ಟೆಂಡರ್/ಬಹಿರಂಗ ಹರಾಜು/ಇಲಾಖಾ ಮಾರಾಟದ ಮೂಲಕ ವಿಲೇವಾರಿ ಮಾಡಲು ಇಲಾಖಾಧಿಕಾರಿಗಳಿಗೆ ನಿಗದಿಪಡಿಸಲಾದ ಆರ್ಥಿಕ ಅಧಿಕಾರವನ್ನು ಪರಿಷ್ಕರಿಸುವ ಬಗ್ಗೆ

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಕೃತೋಇ 301 ತೋಸವಿ 2000, ದಿನಾಂಕ: 03–10–2002

2. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ: ಇಡಿ/ಕೆಎಸ್ಎಚ್‌ಡಿಎ/ಸತೋಅ3/2012–13, ದಿನಾಂಕ: 04/16–04–2013

**ಪ್ರಸ್ತಾವನೆ:**

ತೋಟಗಾರಿಕೆ ಇಲಾಖೆಯ ವಿವಿಧ ತೋಟಗಾರಿಕೆ ಕ್ಷೇತ್ರ ಮತ್ತು ನರ್ಸರಿಗಳ ಫಸಲನ್ನು ಟೆಂಡರ್/ಬಹಿರಂಗ ಹರಾಜು/ಇಲಾಖಾ ಮಾರಾಟದ ಮೂಲಕ ವಿಲೇವಾರಿ ಮಾಡಲು ಮೇಲೆ ಓದಲಾದ (1)ರ ಸರ್ಕಾರದ ಆದೇಶ ಸಂಖ್ಯೆ: ಕೃತೋಇ 301 ತೋಸವಿ 2000, ದಿನಾಂಕ: 03–10–2002ರಲ್ಲಿ ತೋಟಗಾರಿಕೆ ಇಲಾಖೆಯ ವಿವಿಧ ಮಟ್ಟದ ಅಧಿಕಾರಿಗಳಿಗೆ ಆರ್ಥಿಕ ಅಧಿಕಾರವನ್ನು ನಿಗದಿಪಡಿಸಲಾಗಿದ್ದು, ಈ ಆರ್ಥಿಕ ಅಧಿಕಾರವು 11 ವರ್ಷದ ಹಿಂದಿನದಾಗಿದ್ದು, ಸದರಿ ಆದೇಶ ಭಾಗ–IIರ ಕ್ರಮ ಸಂಖ್ಯೆ. 12 ಮತ್ತು 15ರಲ್ಲಿ ಪ್ರತ್ಯಾಯೋಜಿಸಿರುವ ಆದೇಶವನ್ನು ಮಾರ್ಪಡಿಸುವಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ತೋಟಗಾರಿಕೆ ನಿರ್ದೇಶಕರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ತೋಇ 108 ತೋಇವಿ 2013, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ, 2014**

ತೋಟಗಾರಿಕೆ ಇಲಾಖೆಯ ಅಧಿಕಾರಿಗಳಿಗೆ ಆರ್ಥಿಕ ಮತ್ತು ಆಡಳಿತಾತ್ಮಕ ಅಧಿಕಾರ ಪ್ರತ್ಯಾಯೋಜಿಸಿರುವ ಸರ್ಕಾರದ ಆದೇಶ ಸಂಖ್ಯೆ: ಕೃತೋಇ 301 ತೋಸವಿ 2000, ದಿನಾಂಕ: 03–10–2002ರಲ್ಲಿನ ಭಾಗ–IIರ ಕ್ರಮ ಸಂಖ್ಯೆ. 12 ಮತ್ತು 15ರಲ್ಲಿ ಅಧಿಕಾರಿಗಳಿಗೆ ಪ್ರತ್ಯಾಯೋಜಿಸಲಾದ ಆರ್ಥಿಕ ಅಧಿಕಾರವನ್ನು ಅನುಬಂಧದಲ್ಲಿರುವಂತೆ ಮರುನಿಗದಿಗೊಳಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಆಇ 481 ವೆಚ್ಚ–4/2014, ದಿನಾಂಕ: 25–01–2014ರಲ್ಲಿ ನೀಡಲಾದ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ. ರಾಮಲಿಂಗಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ತೋಟಗಾರಿಕೆ ಇಲಾಖೆ

**ಅನುಬಂಧ**

**PART II**

**DELEGATION OF POWERS OF THE OFFICERS OF THE DEPARTMENT OF HORTICULTURE SPECIAL FINANCIAL AND TECHNICAL POWERS**

| Sl. No. | Nature of Powers | Director of Horticulture | Additional Director of Horticulture | Joint Director of Horticulture | Deputy Director of Horticulture/ Senior Assistant Director of Horticulture (State Sector) / Special Officer-Hill Station / Senior Assistant Director of Horticulture-Tissue Culture, Plant Nutrition, F.V.P.P., K.R.S. | Senior Assistant Director of Horticulture/ Assistant Director of Horticulture (Taluk/Farm) | Assistant Horticulture Officer on Independent charge of Farms | Remarks |
|---|---|---|---|---|---|---|---|---|
| | | DH | Addn.DH | JDH | DDH/SADH | SADH/ADH | AHO | |
| 1 | 2 | 3 | 4 | 5 | 6 | 7 | 8 | 9 |
| 12 | To Order the disposal of perishable produce of farms of the Department according to discretion (Departmental Sale) | Full Powers as per book value | Rs. 20,000/- each case as per book value | Rs. 10,000/- each case as per book value | Rs.5,000/- in each case as per book value | Rs. 1,000/- in each case as per book value | Rs. 500/- in each case per book value | |
| 15 | To sanction and confirm the auction sale of farm produce and other farm belongings | Full Powers | Rs. 2,00,000/- each case | Rs. 1,00,000/- each case | Rs.50,000/- each case | Rs. 10,000/- each case | Rs. 5,000/- each case | |

**ಬಿ.ವಿ. ರಾಮಲಿಂಗಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ತೋಟಗಾರಿಕೆ ಇಲಾಖೆ

**P.R. 418**
**SC 20**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59